## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1738 |
| ಮಾನ್ಯ ಸದಸ್ಯರ ಹೆಸರು | : ಶ್ರೀ ಯು.ಬಿ ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : 14.03.2022 |
| ಉತ್ತರಿಸುವ ಸಚಿವರು | : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ತಂತ್ರಜ್ಞಾನ ಆಧಾರಿತ ಆಂಬ್ಯುಲೆನ್ಸ್ ಕಾರ್ಯಾಚರಣೆಗೆ ಕಳೆದ ನಾಲ್ಕು ವರ್ಷಗಳಿಂದ ಸರ್ಕಾರ ಅನುಮತಿ ನೀಡದಿರಲು ಕಾರಣವೇನು; | • ಕರ್ನಾಟಕ ರಾಜ್ಯದಲ್ಲಿ, ತುರ್ತು ವೈದ್ಯಕೀಯ ಪ್ರತಿಕ್ರಿಯೆ ಸೇವೆಯನ್ನು 108–ಆರೋಗ್ಯ ಕವಚ ಸೇವೆಯನ್ನು 14ನೇ ಆಗಸ್ಟ್ 2008 ರಿಂದ ಸರ್ಕಾರಿ ಮತ್ತು ಖಾಸಗಿ ಸಹಭಾಗಿತ್ವದಡಿಯಲ್ಲಿ, ಸಿಂಕದ್ರಬಾದ್ ಮೂಲದ ಜಿ.ವಿ.ಕೆ–ಇ.ಎಂ.ಆರ್.ಐ ಸಂಸ್ಥೆಯನ್ನು ನೇಮಿಸಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಸೇವೆಯ ಒಡಂಬಡಿಕೆಯು 10 ವರ್ಷಗಳ ಅವಧಿಯಾಗಿದೆ. ಆದರೆ 108–ಸೇವೆ ಅತ್ಯಂತ ಅವಶ್ಯಕ ಸೇವೆಯಾಗಿರುವುದರಿಂದ ಮುಂದಿನ ಸೇವೆದಾರರು ಆಯ್ಕೆಯಾಗುವವರೆಗೆ ಸದರಿ ಸಂಸ್ಥೆಯನ್ನೇ ಮುಂದುವರೆಸಿಕೊಂಡು ಹೋಗಲಾಗುತ್ತಿದೆ.<br>• 108–ಆರೋಗ್ಯ ಕವಚ ಸೇವೆಗೆ 2017 ಹಾಗೂ 2020ನೇ ಸಾಲುಗಳಲ್ಲಿ ಹೊಸ ಸೇವಾದಾರರನ್ನು ಆಯ್ಕೆ ಮಾಡಲು ಟೆಂಡರ್ ಅಹ್ವಾನಿಸಲಾಗಿದ್ದು, ತಾಂತ್ರಿಕ ಕಾರಣಗಳಿಂದ ಸದರಿ ಟೆಂಡರ್‌ನ್ನು ರದ್ದುಗೊಳಿಸಲಾಗಿತ್ತು.<br>• ರಾಜ್ಯದಲ್ಲಿ ಉತ್ತಮ ತುರ್ತು ವೈದ್ಯಕೀಯ ಸೇವೆ ಒದಗಿಸಲು ಅಗತ್ಯವಾದ ಸಲಹೆಗಳನ್ನು ನೀಡಲು 108–ಆರೋಗ್ಯ ಕವಚ ಸೇವೆಗೆ ಉನ್ನತ ಮಟ್ಟದ ಸಲಹಾ ಸಮಿತಿ ಮತ್ತು ತಾಂತ್ರಿಕ ಸಮಿತಿಯನ್ನು ರಚಿಸಲಾಯಿತು.<br>• ಉನ್ನತ ಮಟ್ಟದ ಸಲಹಾ ಸಮಿತಿ ಹಾಗೂ ತಾಂತ್ರಿಕ ಸಮಿತಿಗಳು ಹಲವು ಸಭೆಗಳನ್ನು ನಡೆಸಿ ನಂತರ ಸಮಿತಿಯು ಮಾಡಲಾದ ಶಿಫಾರಸ್ಸಿನನ್ವಯ ಸಚಿವ ಸಂಪುಟದ ಅನುಮೋದನೆ ಪಡೆದು ಆದೇಶ ಸಂಖ್ಯೆ ಆಕುಕ 213 ಸಿಜಿಇ 2021, ದಿನಾಂಕ:04.03.2022ರನ್ವಯ ಆರೋಗ್ಯ ಕವಚ–108 ಯೋಜನೆಗೆ ಅರ್ಹ ಸೇವಾದಾರರನ್ನು ಆಯ್ಕೆ ಮಾಡಲು ಅನುಮೋದನೆ ನೀಡಲಾಗಿದೆ.<br>• ಇದರನ್ವಯ 108–ಆರೋಗ್ಯ ಕವಚ ಸೇವೆಯ ಸುಧಾರಣೆಗೆ ಹೊಸದಾಗಿ ಕರೆಯಲಾಗುತ್ತಿರುವ ಟೆಂಡರ್‌ನಲ್ಲಿ ಮಾರ್ಪಡುಗಳನ್ನು ಮಾಡಲಾಗುತ್ತಿದೆ ಹಾಗೂ ಅಂತರಾಷ್ಟ್ರೀಯ ಮಟ್ಟದ ಅತ್ಯಾಧುನೀಕ ತಂತ್ರಜ್ಞಾನದ ಇ.ಎಂ.ಎಸ್ ಸೇವೆಯಾಗಿ ಉನ್ನತಿಕರಿಸಿ ಹೊಸ ಸೇವಾದಾರರನ್ನು ಆಯ್ಕೆ ಮಾಡಲು ಟೆಂಡರ್ ಕರೆಯಲು ಕ್ರಮ ವಹಿಸಲಾಗುತ್ತಿದೆ. |

| ಆ | ಈಗಿನ ಒಡಂಬಡಿಕೆದ ಅನುಸಾರ ಜಿ.ವಿ.ಕೆ ಸಂಸ್ಥೆಗೆ ನೂರಾರು ಕೋಟಿ ರೂಪಾಯಿಗಳನ್ನು ಪಾವತಿಸಿರುವುದು ನಿಜವೇ; | ಒಡಂಬಡಿಕೆಯನ್ವಯ ಜಿ.ವಿ.ಕೆ–ಇ.ಎಂ.ಆರ್.ಐ ಸಂಸ್ಥೆಗೆ ಬಿಡುಗಡೆಗೊಳಿಸಲಾದ ಅನುದಾನದ ಹಾಗೂ ಖರ್ಚು–ವೆಚ್ಚದ ವಿವರಗಳು ಈ ಕೆಳಕಂಡಂತಿದೆ: (ರೂ. ಕೋಟಿಗಳಲ್ಲಿ) |
|---|---|---|

| ವರ್ಷ | ಆಯವ್ಯಯದಲ್ಲಿ ಅನುಮೋದನೆಯಾಗಿರುವ ಅನುದಾನ | ಸೇವಾದಾರರಿಂದ ಮಾಡಲಾದ ವೆಚ್ಚ |
|---|---|---|
| 2013–14 | 64.43 | 74.65 |
| 2014–15 | 69.12 | 87.19 |
| 2015–16 | 104.83 | 97.37 |
| 2016–17 | 123.00 | 92.83 |
| 2017–18 | 256.06 | 105.09 |
| 2018–19 | 179.39 | 104.16 |
| 2019–20 | 222.22 | 112.78 |
| 2020–21 | 230.00 | 120.01 |
| 2021–22 (ಜನವರಿ 2022 ರ ಅಂತ್ಯಕ್ಕೆ) | 236.00 | 91.28 |

| ಇ | ಆಂಬ್ಯುಲೆನ್ಸ್ ಸೇವೆಯನ್ನು ಸರಳೀಕರಣಗೊಳಿಸಲು ಹಮ್ಮಿಕೊಂಡಿರುವ ಯೋಜನೆಗೆ ಸರ್ಕಾರ ಒಪ್ಪಿಗೆ ನೀಡುವುದೇ? | ಆಂಬ್ಯುಲೆನ್ಸ್ ಸೇವೆಯನ್ನು ಸರಳೀಕರಣಗೊಳಿಸಲು ಹಮ್ಮಿಕೊಂಡಿರುವ ಯೋಜನೆಗೆ ಆದೇಶ ಸಂಖ್ಯೆ: ಆಕುಕ 213 ಸಿಜಿಇ 2021, ದಿನಾಂಕ:04.03.2022ರಲ್ಲಿ 108–ಆರೋಗ್ಯ ಕವಚ ಯೋಜನೆಯ ತುರ್ತು ಸೇವೆಯನ್ನು ಮೇಲ್ದರ್ಜೆಗೇರಿಸಿ ಆಂಬ್ಯುಲೆನ್ಸ್ ಸಂಖ್ಯೆಯನ್ನು 750ಕ್ಕೆ ಸೀಮಿತಗೊಳಿಸಿ 54 ಕರೆ ಕೇಂದ್ರದ ಆಸನ ಸಂಖ್ಯೆಯನ್ನು 75 ಆಸನ ತುರ್ತು ಕರೆ ಕೇಂದ್ರ ಹಾಗೂ ತುರ್ತು ವೈದ್ಯಕೀಯ ತರಬೇತಿ ಕೇಂದ್ರವನ್ನು ಸ್ಥಾಪಿಸಿ ಅರ್ಹ ಸೇವಾದಾರರನ್ನು ಆಯ್ಕೆ ಮಾಡಲು ಟೆಂಡರ್ ಆಹ್ವಾನಿಸಲು ಅನುಮೋದನೆ ನೀಡಲಾಗಿದೆ. |
|---|---|---|

**ಆಕುಕ 65 ಎಸ್‌ಬಿವಿ 2022**

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು